ಶ್ರೀ ಹೆಚ್. ಟಿ. ತಳವಾರ್*

# ಸನ್ನತಿಯಲ್ಲಿ ಉತ್ಖನನಗಳು ೧೯೯೩-೯೪

ಸನ್ನತಿಯು, ಗುಲ್ಬರ್ಗ ಜಿಲ್ಲೆಯ, ಚಿತಾಪುರ ತಾಲ್ಲೂಕಿನಲ್ಲಿರುವ ಒಂದು ಚಿಕ್ಕಹಳ್ಳಿ. ಈ ಗ್ರಾಮವು ಯಾದಗಿರಿಯಿಂದ ೪೦ ಕಿ.ಮೀ. ದೂರದಲ್ಲಿ ಹೈದರಾಬಾದ್‌ನಿಂದ ನೈರುತ್ಯಕ್ಕೆ ೨೨೦ ಕಿ.ಮೀ. ಮತ್ತು ಚಿತಾಪುರ–ನಾಲ್ವಾರ ರೈಲ್ವೆ ನಿಲ್ದಾಣದಿಂದ ೨೦ ಕಿ.ಮೀ. ದೂರದಲ್ಲಿದ್ದು, ಭೀಮಾನದಿಯ ಎಡದಂಡೆಯ ಮೇಲಿದೆ. ಹಾಗೂ ಈ ಹಳ್ಳಿಯು ಶ್ರೀ ಚಂದ್ರಲಾಂಬಾ ದೇವಸ್ಥಾನದಿಂದ (ಕ್ರಿ.ಶ. ೭–೮ನೇ ಶತಮಾನ) ಪ್ರಸಿದ್ಧಿ ಪಡೆದ ಯಾತ್ರಾ ಸ್ಥಳವಾಗಿದೆ.

ಸನ್ನತಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಪ್ರಾಚ್ಯ ಅವಶೇಷಗಳಿಂದ ಕೂಡಿದ ಒಂದು ಶ್ರೀಮಂತ ಪ್ರದೇಶವಾಗಿರುವುದು. ಅಂತೆಯೇ ಸನ್ನತಿಗೆ ಸಮೀಪವಿರುವ ಕನಗನಹಳ್ಳಿಯ ಸ್ತೂಪ, ಆನೆಗುತ್ತಿಯ ಸ್ತೂಪದ ದಿನ್ನೆ, ಬೆನಗುತ್ತಿಯ ದಿಬ್ಬ ಹಾಗೂ ಕೈತಾಳ ಹೊಲದಲ್ಲಿರುವ ವಸತಿ ಪ್ರದೇಶದ ದಿಬ್ಬಗಳು ಮತ್ತು ಚಿತಾಪುರ ತಾಲ್ಲೂಕಿನಲ್ಲಿ ಹೆಸರಿಸುವಂತಿದ್ದರೆ, ಭೀಮಾನದಿಯಾಚೆ ಅದೇ ಜಿಲ್ಲೆಯ ಶಹಪೂರ ತಾಲ್ಲೂಕಿನ ಹುರಸಗುಂಡಿಗಿ ಹಳ್ಳಿಯ ಹತ್ತಿರವಿರುವ ಸ್ತೂಪವು ಕರ್ನಾಟಕದಲ್ಲಿ ೧–೨ನೆಯ ಶತಮಾನಕ್ಕೆ (ಶಾತವಾಹನ ಕಾಲದ್ದು) ಸಂಬಂಧಿಸಿದ ಬೌದ್ಧಸ್ತೂಪಗಳ ಅಧ್ಯಯನಕ್ಕೆ ನಾಂದಿಯಾಗಿರುವವು. ಮತ್ತು ಬೌದ್ಧರ ವಾಸ್ತುಶಿಲ್ಪದ ಮೇಲೆ ಹೆಚ್ಚಿನ ಬೆಳಕನ್ನು ಪ್ರತಿಬಿಂಬಿಸುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಶಾತವಾಹನರ ಕಾಲದಲ್ಲಿ ಈ ಪ್ರದೇಶವು ಒಂದು ಬೌದ್ಧರ ಯಾತ್ರಾಸ್ಥಳವಾಗಿರುವುದು ಗಮನಕ್ಕೆ ಬರುತ್ತದೆ. ಭೀಮಾನದಿಯ ಮತ್ತು ಅದರ ಸುತ್ತಮುತ್ತ ದೊರೆತ ಹಳೆಯ ಶಿಲಾಯುಗದ, ನೂತನ ಶಿಲಾಯುಗದ, ಸೂಕ್ಷ್ಮ ಶಿಲಾಯುಗದ ಅವಶೇಷಗಳು ಸನ್ನತಿಯನ್ನು ಶಿಲಾಯುಗಕ್ಕೆ ಕರೆದೊಯ್ಯುತ್ತವೆ.

ಈ ಹಳ್ಳಿಯು ಎರಡು ಸುತ್ತುವರಿದ ಕೋಟೆಗಳಿಂದ ಕೂಡಿದೆ. ಒಳ ಕೋಟೆಯೊಳಗಿನ ರಣಮಂಡಲವೆಂದು ಕರೆಯುವ ಸುಮಾರು ೮೦ ಎಕರೆ ಪ್ರದೇಶವು ರಾಜವಾಡೆ (Citadel) ಆಗಿರುತ್ತದೆ. ಇಟ್ಟಿಗೆಯ ಕೋಟೆ ಗೋಡೆ ಸುಮಾರು ೪ ಮೀಟರ್ ಅಗಲ ಮತ್ತು ೨–೩ ಮೀಟರ್ ಎತ್ತರವಿದೆ. ಇದನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ.

ರಣಮಂಡಲವೆಂದು (Citadel) ಕರೆಯಲಾದ ಸ್ಥಳದ ಮಹತ್ವವನ್ನು ತಿಳಿಯಲು ಉತ್ಖನನವನ್ನು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯು ಕೈಗೊಂಡಿದೆ.

ಕೋಟೆಯ ನಿವೇಶನದ ಇಟ್ಟಿಗೆಯ ಆಕಾರ ೩೪ × ೨೭ × ೯ ಸೆಂ.ಮೀ. ಮತ್ತು ೪೭ × ೨೪ × ೮ ಸೆಂ.ಮೀ. ಇದ್ದು, ಅಗೆತದಲ್ಲಿ ಸಿಕ್ಕಿರುವ ಹೊಳಪಿನಕಲ್ಲು ಹಲವು ಔತ್ತರೇಯ ಕಪ್ಪು ಹೊಳಪಿನ ಕುಂಬಗಳು (Northern black polished ware) ಮತ್ತು

* ತಾಂತ್ರಿಕ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು.

ರೋಮನ್ ಮಡಿಕೆಯ ಚೂರುಗಳು ಇತ್ಯಾದಿಗಳು ನಿವೇಶನವು ಮೌರ್ಯರ ಕಾಲದಷ್ಟು ಹಳೆಯದೆಂದು ಸೂಚಿಸುತ್ತದೆ. ಅಲ್ಲದೆ ಇದು ಒಂದು ವಾಣಿಜ್ಯ ಕೇಂದ್ರ ವಾಗಿತ್ತು ಎಂಬುದಕ್ಕೆ ಒತ್ತು ಕೊಡುತ್ತದೆ.

ಕರ್ನಾಟಕದಲ್ಲಿ ನಾವು ಅಶೋಕನ ಶಾಸನಗಳನ್ನು ನೋಡಬಹುದು. ಆದರೆ ಉತ್ತರೇಯ ಕಪ್ಪು ಹೊಳಪಿನ ಕುಂಬಗಳ ಸಂಶೋಧನೆಯು ಕರ್ನಾಟಕದ ಪ್ರಾಗೈತಿಹಾಸ ಸಂಶೋಧನೆಯಲ್ಲಿ ಒಂದು ಹೊಸ ಯುಗವನ್ನೇ ನಿರ್ಮಿಸಿ, ಮೌರ್ಯರ ಅವಶೇಷಗಳಲ್ಲಿ ಒಂದಾದ ಈ ಕುಂಬಗಳ ಬಗ್ಗೆ ಇದ್ದ ಒಗಟನ್ನು ನಿವಾರಿಸಿ ಕರ್ನಾಟಕದ ಹೊಸ ಇತಿಹಾಸವನ್ನು ಸೃಷ್ಟಿ ಮಾಡಲು ಅನುಕೂಲ ಮಾಡಿ ಕೊಟ್ಟಿರುವುದು.

ಉತ್ಖನನದಲ್ಲಿ ದೊರೆತ ಇಟ್ಟಿಗೆಯ ಬಾವಿಗಳು ೧.೫೦ ಮೀಟರ್ ಎತ್ತರ ಹಾಗೂ ೧.೧೫ ಮೀಟರ್ ಆಗಿದ್ದು (ಇಟ್ಟಿಗೆ ೨೮ × ೨೨ × ೧ ಸೆಂ.ಮೀ.) ಶಾತ ವಾಹನರ ಕಾಲದಾಗಿದ್ದು (ಕ್ರಿ.ಶ. ೧–೨ನೆಯ ಶತಮಾನ) ಕರ್ನಾಟಕದ ಪ್ರಾಗೈತಿಹಾಸದಲ್ಲಿ ನೀರು ಶೇಖರಣೆ ಪದ್ಧತಿಯ ಬಗ್ಗೆ ಮಾಹಿತಿಯನ್ನು ನೀಡುವುದು. ಅಲ್ಲದೆ ವಾಯುವ್ಯ ದಿಕ್ಕಿಗೆ ಹೋಗುವ ಹಾಸುಗಲ್ಲು ನಗರೀಕರಣದ ಕುರುಹು ಎಂದು ಹೇಳಬಹುದು.

ಉತ್ಖನನದಲ್ಲಿ ಹೇರಳವಾಗಿ ಅವಶೇಷಗಳು, ಮಣಿ ಗಳು, ನೀಲಿವೈಡೂರ್ಯ, ಕಪ್ಪು, ಹಸಿರು ಮತ್ತು ಕೆಂಪು ಜಾಸ್ಪರ್, ಕಾರನೀಲಿಯನ್, ದಂತ ಮತ್ತು ಸುಟ್ಟಮಣ್ಣಿನ ಮಣಿಗಳು, ಕಪ್ಪೆಚಿಪ್ಪಿನ ಬಳೆಗಳು, ಕಬ್ಬಿಣದ ಮೊಳೆಗಳು, ತಾಮ್ರದ ಉಂಗುರ ಮತ್ತು ಮೊಳೆಗಳು, ಶಾತವಾಹನರ ಕಾಲದ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಹಾಗೂ ಕಾಸಿನ ನಾಣ್ಯಗಳು ಹಾಗೂ ಸುಟ್ಟ ಮಣ್ಣಿನ ಗೊಂಬೆಗಳು, ದಂತದ ಸ್ತೂಪ, ವಿವಿಧ ರೀತಿಯ ಅರೆಯುವ ಕಲ್ಲುಗಳು ಕಣ್ಮನ ಸೆಳೆಯುವಂತಿವೆ. ಉತ್ಖನನವು ಇನ್ನೂ ಪ್ರಗತಿ ಪಥದಲ್ಲಿದ್ದು, ಈ ಉತ್ಖನನವು ಕರ್ನಾಟಕದ ಪ್ರಾಗೈತಿಕ ಇತಿಹಾಸವನ್ನು ಪುನಃ ನಿರ್ಮಾಣ ಮಾಡುವಲ್ಲಿ ಸಹಾಯಕ ವಾಗಿದೆ. ಇನ್ನೂ ಹೆಚ್ಚಿನ ಮಾಹಿತಿಯನ್ನು ವಿದ್ವಾಂಸ ಲೋಕಕ್ಕೆ ಒದಗಿಸಲು ಇದರಿಂದ ಅವಕಾಶವಾಗಲಿದೆ.